14/12/21

**ಕರ್ನಾಟಕ ವಿಧಾನ ಪರಿಷತ್ತು**

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : 26(321)

**ಸದಸ್ಯರ ಹೆಸರು** : ಡಾ॥ ತೇಜಸ್ವಿನಿಗೌಡ (ವಿಧಾನಸಭೆಯಿಂದ ಚುನಾಯಿತರಾದವರು)

**ಉತ್ತರಿಸಬೇಕಾದ ದಿನಾಂಕ** : 20-12-2021

**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್ ನಿಂದಾಗಿ 2020 ರಿಂದ ಇತ್ತೀಚಿನವರೆಗೆ ಶಾಲಾ ಕಾಲೇಜುಗಳು ಸ್ಥಗಿತವಾಗಿದ್ದರಿಂದ ಮಕ್ಕಳು ಹೆಚ್ಚಿನ ರೀತಿ ಖಿನ್ನತೆಗೆ ಒಳಗಾಗಿದ್ದು, ಈ ಬಗ್ಗೆ ಮಕ್ಕಳ ಮಾನಸಿಕ ಸಮತೋಲನ ಕುರಿತು ಅಧ್ಯಯನ ಮಾಡಲಾಗಿದೆಯೇ; | • ಕೋವಿಡ್ ಹಿನ್ನೆಲೆಯಲ್ಲಿ ಶಾಲಾ ಕಾಲೇಜುಗಳು ಸ್ಥಗಿತಗೊಂಡಿದ್ದರಿಂದ ಮಕ್ಕಳು ಖಿನ್ನತೆಗೆ ಒಳಗಾಗುವ ಸಂಭವನೀಯತೆ ಗಮನಕ್ಕೆ ಬಂದಿರುತ್ತದೆ. ಶಾಲೆಗಳು ಭೌತಿಕವಾಗಿ ಪ್ರಾರಂಭವಾಗದೇ ಇರುವ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ಹೊರೆಯಾಗದಂತೆ ವೈಜ್ಞಾನಿಕವಾಗಿ ಆನ್‌ಲೈನ್ ತರಗತಿಗಳನ್ನು ನಡೆಸಲು ವೇಳಾಪಟ್ಟಿಯನ್ನು ಸಿದ್ಧಪಡಿಸಿ ಅದರಂತೆ ಕ್ರಮವಹಿಸಲಾಗಿರುತ್ತದೆ.<br>• ಆನಂತರ, ಶಿಕ್ಷಣ ಮತ್ತು ಆರೋಗ್ಯ ತಜ್ಞರ ಸಮಿತಿಯ ಸಲಹೆಯಂತೆ ಶಾಲಾ ಕಾಲೇಜುಗಳನ್ನು ಕೆಳಕಂಡಂತೆ ಹಂತಹಂತವಾಗಿ ಆರಂಭಿಸಲಾಗಿರುತ್ತದೆ.<br>• 2021-22ನೇ ಸಾಲಿನಲ್ಲಿ ದಿನಾಂಕ:23/08/2021 ರಿಂದ ಮೊದಲ ಹಂತವಾಗಿ 9 & 10ನೇ ತರಗತಿಗಳ ವಿದ್ಯಾರ್ಥಿಗಳಿಗೆ ಅರ್ಧ ದಿನ ಭೌತಿಕವಾಗಿ ಶಾಲೆಗಳನ್ನು ತೆರೆಯಲಾಯಿತು.<br>• 6 ರಿಂದ 8 ನೇ ತರಗತಿಗಳ ವಿದ್ಯಾರ್ಥಿಗಳಿಗೆ ದಿನಾಂಕ:06/09/21 ರಿಂದ ಅಪರಾಹ್ನ ಅರ್ಧ ದಿನ ಭೌತಿಕವಾಗಿ ಶಾಲೆಗಳನ್ನು ತೆರೆಯಲಾಯಿತು.<br>• 6 ರಿಂದ 10 ನೇ ತರಗತಿಗಳ ವಿದ್ಯಾರ್ಥಿಗಳಿಗೆ ದಿನಾಂಕ:01/10/21 ರಿಂದ ಪೂರ್ಣದಿನ ಭೌತಿಕವಾಗಿ ಶಾಲೆಗಳನ್ನು ತೆರೆಯಲಾಯಿತು.<br>• 1 ರಿಂದ 5 ನೇ ತರಗತಿಗಳ ವಿದ್ಯಾರ್ಥಿಗಳಿಗೆ ದಿನಾಂಕ:25/10/21 ರಿಂದ ಅಪರಾಹ್ನ ಅರ್ಧ ದಿನ ಭೌತಿಕವಾಗಿ ಶಾಲೆಗಳನ್ನು ತೆರೆದು ನಂತರ ದಿನಾಂಕ:02/11/2021 ರಿಂದ ಪೂರ್ಣ ಪ್ರಮಾಣದಲ್ಲಿ ತರಗತಿಗಳನ್ನು ತೆರೆಯಲಾಯಿತು.<br>• ಮಕ್ಕಳ ಮಾನಸಿಕ ಸಮತೋಲನ ಕುರಿತು ಅಧ್ಯಯನ ನಡೆಸಿರುವುದಿಲ್ಲ. ಆದರೆ, ಮಕ್ಕಳು ಕೋವಿಡ್ ಹಿನ್ನೆಲೆಯಲ್ಲಿ, ಮಾನಸಿಕ ಕ್ಷೋಭೆಗೆ ಒಳಗಾಗದಂತೆ ಸೂಕ್ತ ಸಲಹೆ, ಆಪ್ತ |

| | | |
|---|---|---|
| | | ಸಮಾಲೋಚನೆ ನೀಡಲಾಗಿರುತ್ತದೆ. ಮುಂದುವರೆದು, ಸಾಮಾಜಿಕ ಅಂತರ, ನೈರ್ಮಲೀಕರಣ, ಸುರಕ್ಷಿತ ಕುಡಿಯುವ ನೀರು ಮತ್ತು ಆಹಾರ ತೆಗೆದುಕೊಳ್ಳುವಂತೆ ಕೋವಿಡ್ ಸಾಂಕ್ರಾಮಿಕ ಎದುರಿಸುವ ಬಗ್ಗೆಯೂ ಸಹ ಸೂಕ್ತ ಸಲಹೆ, ಮಾರ್ಗದರ್ಶನ ನೀಡಲಾಗಿರುತ್ತದೆ. |
| ಆ) | ಕೋವಿಡ್‌ನಿಂದಾಗಿ Lock Down ಅವಧಿಯಲ್ಲಿ ಅನೇಕ ಮಕ್ಕಳು Mobile Addiction ಗೆ ತುತ್ತಾಗಿದ್ದು ಕಂಡುಬಂದಿದ್ದು. ಈ ಬಗ್ಗೆ ತಂದೆ ತಾಯಿಗಳಿಗೆ ಇದೊಂದು ದೊಡ್ಡ ಸಾಮಾಜಿಕ ಸಮಸ್ಯೆಯಾಗಿದ್ದು, ಇಂತಹ ಪರಿಸ್ಥಿತಿಯಿಂದ ಮಕ್ಕಳು ಹಾಗೂ ಪೋಷಕರನ್ನು ರಕ್ಷಿಸಲು ಸರ್ಕಾರ ಯಾವ ರೀತಿ ಕ್ರಮ ವಹಿಸಲಾಗಿದೆ; | • ವಿದ್ಯಾರ್ಥಿಗಳು ಹೆಚ್ಚು ಮೊಬೈಲ್ ಬಳಕೆ ಮಾಡುವುದನ್ನು ತಪ್ಪಿಸುವ ಸಲುವಾಗಿ ದೂರದರ್ಶನ ಚಂದನ ವಾಹಿನಿಯಲ್ಲಿ "ಸಂವೇದ" ಕಾರ್ಯಕ್ರಮದ ಅಡಿಯಲ್ಲಿ 1ನೇ ತರಗತಿಯಿಂದ 10ನೇ ತರಗತಿವರೆಗೆ ತರಗತಿವಾರು, ವಿಷಯವಾರು ಸಂಪನ್ಮೂಲ ಶಿಕ್ಷಕರಿಂದ ಬೋಧನೆಯನ್ನು ಹಾಗೂ ಬಾನುಲಿ ಪಾಠವನ್ನು ಹೆಚ್ಚುವರಿಯಾಗಿ 1 ರಿಂದ 4ನೇ ತರಗತಿಯ ವಿದ್ಯಾರ್ಥಿಗಳಿಗೆ ಭಿತ್ತರಿಸಲಾಗಿರುತ್ತದೆ. |
| ಇ) | ಕೋವಿಡ್‌ನಿಂದಾಗಿ ಹಿರಿಯ ನಾಗರೀಕರು ಒಂದೆಡೆಯೇ ಇರಬೇಕಾದ ಬಂಧಿ ಜೀವನ (Confinement Situation) ವಿರುವುದು ಬೆಳಕಿಗೆ ಬಂದಿದ್ದು, ಇವರ ರಕ್ಷಣೆಗೆ ಇಲಾಖೆ ಯಾವ ಕ್ರಮ ಕೈಗೊಂಡಿದೆ; | ರಾಜ್ಯದಲ್ಲಿ ಕೋವಿಡ್ ಸಾಂಕ್ರಾಮಿಕ ರೋಗ ಇದ್ದ ಕಾರಣ ಈ ರೋಗ ಹರಡುವ ಹಿನ್ನೆಲೆಯಲ್ಲಿ, ಆರೋಗ್ಯ ಹಿತದೃಷ್ಟಿಯಿಂದ ಪ್ರತಿ ನಾಗರಿಕರೂ ಅನಾವಶ್ಯಕವಾಗಿ ಹೊರಗೆ ಹೋಗದಂತೆ ಆಡಳಿತ ಸಂಸ್ಥೆಗಳು ಕ್ರಮ ಕೈಗೊಂಡಿದ್ದ ಕಾರಣ ಹಿರಿಯ ನಾಗರಿಕರನ್ನು ಅವರು ವಾಸಿಸುತ್ತಿರುವ ಮನೆಗಳಲ್ಲಿ, ವೃದ್ಧಾಶ್ರಮಗಳಲ್ಲಿ, ಆಶ್ರಯ ಕೇಂದ್ರಗಳಲ್ಲಿ ಸಂರಕ್ಷಣೆ ಮಾಡಲಾಗಿದೆ.<br><br>ಕೋವಿಡ್‌ನಿಂದಾಗಿ ಹಿರಿಯ ನಾಗರೀಕರು ಒಂದೆಡೆಯೇ ಇರಬೇಕಾದ ಬಂಧಿ ಜೀವನ (Confinement Situation) ವಿರುವ ಬಗ್ಗೆ ಯಾವ ಪ್ರಸಂಗವೂ ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ. ನಿರ್ಗತಿಕ ಹಿರಿಯ ನಾಗರೀಕರಿಗಾಗಿ ವೃದ್ಧಾಶ್ರಮಗಳನ್ನು ರಾಜ್ಯ ಹಾಗೂ ಕೇಂದ್ರ ಸರ್ಕಾರದಿಂದ ಸ್ವಯಂಸೇವಾ ಸಂಸ್ಥೆಗಳ ಮುಖಾಂತರ ನಿರ್ವಹಿಸಲಾಗುತ್ತಿದ್ದು, ಈ ಕೇಂದ್ರಗಳಲ್ಲಿ ಕೋವಿಡ್ ಸಮಯದಲ್ಲೂ ಹಿರಿಯ ನಾಗರಿಕರಿಗೆ ಸೂಕ್ತ ವ್ಯವಸ್ಥೆಗಳನ್ನು ಕಲ್ಪಿಸಲಾಗಿತ್ತು. ಅವರಿಗೆ ಊಟ, ವಸತಿ, ಆರೋಗ್ಯ ತಪಾಸಣೆ, ಅಗತ್ಯ ವೈದ್ಯಕೀಯ ಚಿಕಿತ್ಸೆ, ಮನೋರಂಜನೆ, ಯೋಗ ಕಾರ್ಯಕ್ರಮ, ಗ್ರಂಥಾಲಯ ಸೌಲಭ್ಯ ಹಾಗೂ ಇನ್ನಿತರೆ ಸೌಕರ್ಯಗಳನ್ನು ಒದಗಿಸಲಾಗಿರುತ್ತದೆ. ಕೋವಿಡ್-19ರ ಲಸಿಕೆಯನ್ನು ಸಹ ನೀಡಲಾಗಿರುತ್ತದೆ.<br>(ಅನುಬಂಧದಲ್ಲಿರಿಸಿದೆ) |

ಸಂಖ್ಯೆ: ಇಪಿ 396 ಪಿಜಿಸಿ 2021

(ಬಿ.ಸಿ. ನಾಗೇಶ್)

ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ

ಹಾಗೂ ಸಕಾಲ ಸಚಿವರು.

ಅನುಬಂಧ

(2)

ಮಾನ್ಯ ವಿಧಾನಪರಿಷತ್ ಸದಸ್ಯರಾದ ಡಾ॥ ತೇಜಸ್ವಿನಿ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) ಇವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ:321 ಕ್ಕೆ ಉತ್ತರ

- ಹಿರಿಯ ನಾಗರಿಕರಿಗಾಗಿ ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರದ ಅನುದಾನ ಯೋಜನೆಯಡಿ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ವೃದ್ಧಾಶ್ರಮಗಳನ್ನು ನಡೆಸುತ್ತಿದ್ದು, ಈ ವೃದ್ಧಾಶ್ರಮಗಳಲ್ಲಿ ನಿರ್ಗತಿಕ ಹಿರಿಯ ನಾಗರೀಕರನ್ನು ದಾಖಲಿಸಿಕೊಂಡು ಉಚಿತವಾಗಿ ಊಟ, ವಸತಿ ಸೌಕರ್ಯ, ವೈದ್ಯಕೀಯ ಸೇವೆಗಳನ್ನು ಕೋವಿಡ್ ಸಮಯದಲ್ಲೂ ಸಹ ಒದಗಿಸಲಾಗುತ್ತದೆ.
- ಕೋವಿಡ್–19 ರ ಸಂದರ್ಭದಲ್ಲಿ ಆರ್ಥಿಕ ಸಂಕಷ್ಟದಲ್ಲಿರುವ ಹಿರಿಯ ನಾಗರಿಕರಿಗೆ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಆಹಾರ ಮತ್ತು ಅಗತ್ಯ ಸಾಮಾಗ್ರಿ ವಿತರಿಸಿರುತ್ತಾರೆ.
- ಕೋವಿಡ್–19 ಸಂಕಷ್ಟದಲ್ಲಿರುವ ಹಿರಿಯ ನಾಗರಿಕರಿಗೆ ಸಹಾಯ ಒದಗಿಸಲು ಹಿರಿಯ ನಾಗರಿಕರ ಸಹಾಯವಾಣಿ ಬಗ್ಗೆ ಅರಿವು ಮೂಡಿಸಲು ಪತ್ರಿಕಾ ಪ್ರಕಟಣೆ ಹೊರಡಿಸಲಾಗಿರುತ್ತದೆ
- ರಾಜ್ಯದಲ್ಲಿನ ಕೇಂದ್ರ ಮತ್ತು ರಾಜ್ಯ ಸರ್ಕಾರದ ಅನುದಾನಿತ ವೃದ್ಧಾಶ್ರಮಗಳಲ್ಲಿರುವ ಹಿರಿಯ ನಾಗರಿಕರನ್ನು ಒಳಗೊಂಡಂತೆ ಆದ್ಯತೆಯ ಮೇರೆಗೆ ಕೋವಿಡ್ ಲಸಿಕೆ ನೀಡಲು ಕ್ರಮವಹಿಸಲಾಗಿದೆ. ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ತಮ್ಮ ತಮ್ಮ ಜಿಲ್ಲೆಗಳಲ್ಲಿನ ವಿವಿಧ ಸ್ವಯಂ ಸೇವಾ ಸಂಸ್ಥೆಗಳ ಸಹಕಾರದೊಂದಿಗೆ ಕೋವಿಡ್ ಲಸಿಕಾ ಕ್ಯಾಂಪ್‌ಗಳನ್ನು ಏರ್ಪಡಿಸಿ, ಹಿರಿಯ ನಾಗರಿಕರಿಗೆ ಕೋವಿಡ್ ಲಸಿಕೆಯನ್ನು ನೀಡಿರುತ್ತಾರೆ.
- ಈ ವೃದ್ಧಾಶ್ರಮಗಳಲ್ಲಿ ಅಗತ್ಯ ಸುರಕ್ಷತಾ ಕ್ರಮಗಳನ್ನು ಅನುಸರಿಸಿ ಕಾರ್ಯನಿರ್ವಹಿಸುವಂತೆ ಕ್ರಮವಹಿಸಲು ಸಂಬಂಧ ಪಟ್ಟ ಸೇವಾ ಸಂಸ್ಥೆಗಳಿಗೆ ಸೂಕ್ತ ನಿರ್ದೇಶನ ನೀಡಲಾಗಿರುತ್ತದೆ.
- ಕೋವಿಡ್–19 ಸಂಕಷ್ಟ ಪರಿಸ್ಥಿತಿಯಲ್ಲಿ ಇರುವ ಹಿರಿಯ ನಾಗರಿಕರಿಗೆ ಜಿಲ್ಲಾ ಆಸ್ಪತ್ರೆ, ತಾಲ್ಲೂಕು ಆಸ್ಪತ್ರೆಗಳಲ್ಲಿ ಆದ್ಯತೆಯ ಮೇರೆಗೆ ದಾಖಲಾತಿ ನೀಡಿ, ಸೂಕ್ತ ಆರೋಗ್ಯ ಸೇವೆಗಳನ್ನು ಅಗತ್ಯ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸಲು ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಮುಖಾಂತರ ಕ್ರಮವಹಿಸಲಾಗಿದೆ.
- ಕೋವಿಡ್–19 ಸಂಕಷ್ಟ ಪರಿಸ್ಥಿತಿಯಲ್ಲಿ ಹಿರಿಯ ನಾಗರಿಕರಿಗೆ ನಿಯಮಿತವಾಗಿ ಆಯಾ ಮಾಹೆಗಳಲ್ಲಿ ಮಾಸಿಕ ಪಿಂಚಣಿ ನೀಡಲು ಹಾಗೂ ಹಿರಿಯ ನಾಗರಿಕರ ಪಿಂಚಣಿ ಬೇಡಿಕೆಯನ್ನು ಆದ್ಯತೆಯ ಮೇರೆಗೆ ಪರಿಗಣಿಸುವಂತೆ ಕ್ರಮವಹಿಸಲಾಗಿದೆ.
- ವೃದ್ಧಾಶ್ರಮಗಳಲ್ಲಿನ ಹಿರಿಯ ನಾಗರಿಕರಿಗೆ ಅನೇಕ ಸ್ವಯಂ ಸೇವಾ ಸಂಸ್ಥೆಗಳ ಮೂಲಕ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿಗಳು ಮಾಸ್ಕ್ ಹಾಗೂ ಸ್ಯಾನಿಟೈಸರ್ ಅನ್ನು ವಿತರಿಸಿರುತ್ತಾರೆ.
- ಜಿಲ್ಲಾ ಪೋಲಿಸ್ ವರಿಷ್ಠಾಧಿಕಾರಿಗಳ ಕಛೇರಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಹಿರಿಯ ನಾಗರಿಕರ ಸಹಾಯವಾಣಿ ಕೇಂದ್ರಗಳು (ಸಹಾಯವಾಣಿ ಸಂಖ್ಯೆ:1090) ಹಿರಿಯ ನಾಗರಿಕರಿಗೆ ಅಗತ್ಯ ನೆರವನ್ನು ನೀಡಿದೆ.